





**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ — بِسْمِ اللّٰهِ الرَّحْمٰنِ الرَّحِيْمِ ○

1. ಬುಸುಗುಡುತ್ತ ಓಡುವವುಗಳ (ಕುದುರೆಗಳ) ಆಣೆ- — وَالْعٰدِيٰتِ ضَبْحًا ﴿١﴾

2. ಅವು (ತಮ್ಮ ಗೊರಸುಗಳಿಂದ) ಕಿಡಿಗಳನ್ನು ಹಾರಿಸುತ್ತವೆ- — فَالْمُوْرِيٰتِ قَدْحًا ﴿٢﴾

3. ಅನಂತರ ಪ್ರಾತಃಕಾಲದಲ್ಲಿ ಆಕ್ರಮಣ ನಡೆಸುತ್ತವೆ- — فَالْمُغِيْرٰتِ صُبْحًا ﴿٣﴾

4. ಆಗ ಅವು ಧೂಳೆಬ್ಬಿಸುತ್ತವೆ- — فَاَثَرْنَ بِهٖ نَقْعًا ﴿٤﴾

5. ತರುವಾಯ ಇದೇ ಸ್ಥಿತಿಯಲ್ಲಿ ಯಾವುದಾದರೂ ಜನ ಸಮೂಹ ದೊಳಕ್ಕೆ ನುಗ್ಗಿ ಬಿಡುತ್ತವೆ- — فَوَسَطْنَ بِهٖ جَمْعًا ﴿٥﴾

6. ವಾಸ್ತವದಲ್ಲಿ ಮಾನವನು ತನ್ನ ಪ್ರಭುವಿಗೆ ಬಹಳ ಕೃತಘ್ನ ನಾಗಿದ್ದಾನೆ.[1] — اِنَّ الْاِنْسَانَ لِرَبِّهٖ لَكَنُوْدٌ ﴿٦﴾

7. ಮತ್ತು ಇದಕ್ಕೆ ಸ್ವತಃ ಅವನೇ ಸಾಕ್ಷಿಯಾಗಿದ್ದಾನೆ.[2] — وَاِنَّهٗ عَلٰى ذٰلِكَ لَشَهِيْدٌ ﴿٧﴾

8. ಅವನು ಧನ ಕನಕಗಳ ಅತಿಯಾದ ಮೋಹದಲ್ಲಿ ಸಿಲುಕಿ ಕೊಂಡಿದ್ದಾನೆ. — وَاِنَّهٗ لِحُبِّ الْخَيْرِ لَشَدِيْدٌ ﴿٨﴾

---

1. ಅರ್ಥಾತ್- ಅಲ್ಲಾಹನು ಅವರಿಗೆ ದಯಪಾಲಿಸಿರುವ ಶಕ್ತಿ-ಸಾಮರ್ಥ್ಯಗಳನ್ನು ಶೋಷಣೆ ಮತ್ತು ದಬ್ಬಾಳಿಕೆಗಾಗಿ ಉಪಯೋಗಿಸುತ್ತಾನೆ.
2. ಅರ್ಥಾತ್- ಅವನ ಆತ್ಮಸಾಕ್ಷಿಯೇ ಇದಕ್ಕೆ ಸಾಕ್ಷಿ, ಅವನ ಕರ್ಮಗಳು ಇದಕ್ಕೆ ಸಾಕ್ಷಿ. ಅಲ್ಲದೆ ಸತ್ಯನಿಷೇಧಿಗಳಾದ ಅನೇಕ ವ್ಯಕ್ತಿಗಳು ನಾಲಗೆಯಿಂದಲೂ ತಮ್ಮ ಕೃತಘ್ನತೆಯನ್ನು ವ್ಯಕ್ತಪಡಿಸುತ್ತಾರೆ.

أَفَلَا يَعْلَمُ إِذَا بُعْثِرَ مَا فِي الْقُبُورِ ۝٩
وَحُصِّلَ مَا فِي الصُّدُورِ ۝١٠

9-10. ಸಮಾಧಿಗಳೊಳಗೆ (ದಫನವಾಗಿ) ಇರುವ ಸಕಲವನ್ನೂ ಹೊರ ತೆಗೆಯಲಾಗುವ ಮತ್ತು ಹೃದಯಗಳೊಳಗೆ (ಅಡಗಿ) ಇರುವ ಎಲ್ಲವನ್ನೂ ಹೊರತೆಗೆದು ವಿಚಾರಣೆಗೊಳ ಪಡಿಸಲಾಗುವ ಆ ಸಂದರ್ಭವನ್ನು ಅವನು ಅರಿತಿಲ್ಲವೇ?[3]

إِنَّ رَبَّهُم بِهِمْ يَوْمَئِذٍ لَّخَبِيرٌ ۝١١

11. ಖಂಡಿತವಾಗಿಯೂ ಅಂದು ಅವರ ಪ್ರಭು ಅವರನ್ನು ಪೂರ್ಣವಾಗಿ ತಿಳಿದವನಾಗಿರುವನು.[4]

---

3. ಅರ್ಥಾತ್- ಮನಸ್ಸಿನಲ್ಲಡಗಿದ್ದ ಇರಾದೆ ಮತ್ತು ಉದ್ದೇಶಗಳನ್ನೆಲ್ಲಾ ಬಹಿರಂಗಗೊಳಿಸಲಾಗುವುದು. ಅದರ ಬಗ್ಗೆ ಪರಿಶೋಧನೆ ನಡೆಸಿ ಒಳ್ಳೆಯದು ಮತ್ತು ಕೆಟ್ಟದ್ದನ್ನು ಆರಿಸಿ ಪ್ರತ್ಯೇಕ ಗೊಳಿಸಲಾಗುವುದು.
4. ಅರ್ಥಾತ್- ಯಾರು ಹೇಗಿದ್ದಾರೆ ಮತ್ತು ಯಾವ ಶಿಕ್ಷೆ ಅಥವಾ ಪ್ರತಿಫಲಕ್ಕೆ ಅರ್ಹರಾಗಿದ್ದಾರೆ ಎಂದು ಅವನಿಗೆ ಚೆನ್ನಾಗಿ ತಿಳಿದಿದೆ.